# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1543 |
| 2 | ಸದಸ್ಯರ ಹೆಸರು | : | ಶ್ರೀ ಆರ್.ಚೌಡರೆಡ್ಡಿ ತೂಪಲ್ಲಿ |
| 3 | ಉತ್ತರಿಸುವ ದಿನಾಂಕ | : | 19-03-2020 |
| 4 | ಉತ್ತರಿಸುವವರು | : | ಮುಖ್ಯಮಂತ್ರಿ |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆರೋಗ್ಯ ಇಲಾಖೆಯಲ್ಲಿ ಖಾಲಿ ಇರುವ ಪೌರಕಾರ್ಮಿಕರ ಹುದ್ದೆಗಳೆಷ್ಟು; ದಿನಾಂಕ: 01-07-2014 ರಂದು ಎಷ್ಟು ಹುದ್ದೆಗಳನ್ನು ತುಂಬಲು ಅರ್ಜಿ ಆಹ್ವಾನಿಸಲಾಗಿತ್ತು; | ಬಿ.ಬಿ.ಎಂ.ಪಿ.ಯ ಆರೋಗ್ಯ ಇಲಾಖೆಯಲ್ಲಿ ಖಾಲಿ ಇರುವ ಪೌರಕಾರ್ಮಿಕರ ಹುದ್ದೆಗಳ ಸಂಖ್ಯೆ: 5520, ದಿನಾಂಕ: 01-07-2014 ರಂದು ನೇರ ನೇಮಕಾತಿ ಮುಖೇನ 4000 ಹುದ್ದೆಗಳನ್ನು ತುಂಬಲು ಅರ್ಜಿ ಕರೆಯಲಾಗಿತ್ತು. |
| ಆ) | ಇಲಾಖೆಗೆ ಬಂದ ಅರ್ಜಿಗಳು ಎಷ್ಟು; ಇವುಗಳಿಂದ ಬಂದ ಅರ್ಜಿ ಶುಲ್ಕವೆಷ್ಟು; ವಿವರವಾಗಿ ಎಸ್.ಸಿ., ಎಸ್.ಟಿ., ಇತರೆಗಳೊಂದಿಗೆ ವಿವರವಾದ ಮಾಹಿತಿ ನೀಡುವುದು; | ಇಲಾಖೆಗೆ ನೇರ ನೇಮಕಾತಿ ಅಡಿಯಲ್ಲಿ ಬಂದ ಅರ್ಜಿಗಳ ಸಂಖ್ಯೆ: 15,751<br>ಇವುಗಳಿಂದ ಬಂದ ಒಟ್ಟು ಅರ್ಜಿ ಶುಲ್ಕ ರೂ. 16,90,145/-<br>ಮೀಸಲಾತಿಯಂತೆ ಅರ್ಹ ಪಟ್ಟಿ ಮಾಹಿತಿಯು ಈ ಕೆಳಕಂಡಂತೆ ಇರುತ್ತದೆ.<br>1. ಅರ್ಹ ಪಟ್ಟಿ - ಎಸ್.ಸಿ-4414, ಎಸ್.ಟಿ.-172, 2ಎ-792, 2ಬಿ-76, 3ಎ-514, 3ಬಿ-117, ಪ್ರ-1-205 ಸಾಮಾನ್ಯ ವರ್ಗ-205<br>2. ಹೈದರಾಬಾದ್ ಕರ್ನಾಟಕ ವಲಯ-219<br>3. ಹೈದರಾಬಾದ್ ಕರ್ನಾಟಕ ವಲಯ ತಿರಸ್ಕೃತ-129<br>4. ವಯೋಮಿತಿ ತಿರಸ್ಕೃತ-260<br>5. ತಿರಸ್ಕೃತ ಪಟ್ಟಿ-8648 |
| ಇ) | ಹಾಲಿ ಕೆಲಸ ನಿರ್ವಹಿಸುತ್ತಿರುವ ಪೌರಕಾರ್ಮಿಕರನ್ನು ಖಾಯಂ ಮಾಡುವಂತೆ ಮಾನ್ಯ ಉಚ್ಛ ನ್ಯಾಯಾಲಯದಿಂದ ಆದೇಶ ಬಂದಿರುವುದೇ ನಿಜವೇ; ಹಾಗಾದರೆ, ನ್ಯಾಯಾಲಯದ ಪ್ರತಿ ನೀಡುವುದು; | ಪಾಲಿಕೆಯಲ್ಲಿ ಪೌರಕಾರ್ಮಿಕರ ನೇಮಕಾತಿ ಮಾಡುವ ಪ್ರಕ್ರಿಯೆಯಲ್ಲಿ ಗುತ್ತಿಗೆ ಆಧಾರಿತ ಅಥವಾ ಹೊರಗುತ್ತಿಗೆ ಪೌರಕಾರ್ಮಿಕರನ್ನು ಖಾಯಂ ಮಾಡುವಂತೆ ಮಾನ್ಯ ಉಚ್ಛ ನ್ಯಾಯಾಲಯ, ಕಲಬುರಗಿ ಪೀಠವು ರಿಟ್ ಅರ್ಜಿ ಸಂಖ್ಯೆ: 201021-022/2015 ರಲ್ಲಿ ನಿರ್ದೇಶನ ನೀಡಿರುತ್ತದೆ. |

| | | |
|---|---|---|
| | | ಸದರಿ ಆದೇಶದ ವಿರುದ್ಧ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ರಿಟ್ ಅಪೀಲು ಸಂಖ್ಯೆ: 200254 & 200513/2016ನ್ನು ದಾಖಲಿಸಿದ್ದು, ಸದರಿ ಮೇಲ್ಮನವಿಯನ್ನು ಮಾನ್ಯ ಉಚ್ಚ ನ್ಯಾಯಾಲವು ದಿನಾಂಕ: 23-11-2016 ರಂದು ವಿಲೇಗೊಳಿಸಿರುತ್ತದೆ. |
| ಈ) | ಸದರಿ ನೇಮಕಾತಿ ಪ್ರಕ್ರಿಯೆಯನ್ನು ಸ್ಥಗಿತಗೊಳಿಸಲಾಗಿದೆಯೇ; ಸ್ಥಗಿತಗೊಳಿಸಲಾಗಿದ್ದರೆ, ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳಿಗೆ ಅವರು ತುಂಬಿದ ಅರ್ಜಿ ಶುಲ್ಕವನ್ನು ಯಾವ ರೀತಿ ಮತ್ತು ಯಾವಾಗ ಹಿಂದಿರುಗಿಸಲಾಗುವುದು? (ವಿವರವಾದ ಮಾಹಿತಿ ನೀಡುವುದು) | ಹೌದು,<br><br>ಪಾಲಿಕೆಯಲ್ಲಿ ಈಗಾಗಲೇ ಕಾರ್ಯನಿರ್ವಹಿಸುತ್ತಿರುವ ಗುತ್ತಿಗೆ ಅಧಾರಿತ ಪೌರಕಾರ್ಮಿಕರು ತಮ್ಮನ್ನು ಖಾಯಂಗೊಳಿಸುವಂತೆ ಬಿ.ಬಿ.ಎಂ.ಪಿ., ಕೇಂದ್ರ ಕಛೇರಿ ಮುಂದೆ ಮುಷ್ಕರ ನಡೆಸಿ ಮನವಿ ಸಲ್ಲಿಸಿರುತ್ತಾರೆ ಹಾಗೂ ಗುತ್ತಿಗೆ ಪೌರ ಕಾರ್ಮಿಕರ ಸಂಘದ ವತಿಯಿಂದ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 37087/2016 ಅನ್ನು ದಾಖಲಿಸಿದ್ದು, ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಪ್ರಕರಣವು ವಿಚಾರಣೆಯಲ್ಲಿರುವುದರಿಂದ ಅರ್ಜಿ ಶುಲ್ಕವನ್ನು ಹಿಂದಿರುಗಿಸುವ ಬಗ್ಗೆ ಕ್ರಮ ಕೈಗೊಳ್ಳಲು ಸಾಧ್ಯವಾಗಿರುವುದಿಲ್ಲ. |

**ಸಂಖ್ಯೆ: ನಅಇ 93 ಎಂಎನ್‌ಜಿ 2020**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ